# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 28
ಸದಸ್ಯರ ಹೆಸರು : ಶ್ರೀ ಪಿ. ಆರ್. ರಮೇಶ್
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 29.01.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದಲ್ಲಿ ಸಂಚಾರ ನಡೆಸಲು ಯೋಗ್ಯವಿರುವ ಬಿ.ಎಂ.ಟಿ.ಸಿ ಬಸ್ಸುಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಲ್ಲಿ ದಿನಾಂಕ:23.01.2021ರಂತೆ 6537 ಬಸ್ಸುಗಳು ಸಂಚರಿಸಲು ಯೋಗ್ಯವಾಗಿದ್ದು, ವಿವರ ಈ ಕೆಳಕಂಡಂತಿದೆ:-<br>ಮಾಡೆಲ್ – ಸಂಖ್ಯೆ<br>ಟಾಟಾ – 3252<br>ಲೇಲ್ಯಾಂಡ್ – 2000<br>ಐಷರ್ – 425<br>ವೋಲ್ವೋ – 835<br>ಕರೋನಾ – 25<br>**ಒಟ್ಟು – 6537** |
| ಆ) | ನಗರದಲ್ಲಿ ಬಸ್ಸುಗಳ ಸಂಚಾರಕ್ಕೆ ನಿಗದಿಪಡಿಸಿದ ರೂಟ್ (ಮಾರ್ಗಗಳ) ಸಂಖ್ಯೆ ಎಷ್ಟು; ಈ ಎಲ್ಲಾ ಮಾರ್ಗಗಳಲ್ಲಿ ಎಷ್ಟು ತಂಗುದಾಣಗಳಿವೆ; (ವಿವರ ನೀಡುವುದು) | ಬೆಂ.ಮ.ಸಾ.ಸಂಸ್ಥೆಯಲ್ಲಿ ದಿನಾಂಕ: 23-01-2021ರಂತೆ 1913 ರೂಟ್ (ಮಾರ್ಗಗಳು) ಮೂಲಕ ಸಾರಿಗೆಗಳನ್ನು ಆಚರಣೆಗೊಳಿಸಲಾಗುತ್ತಿದೆ.<br><br>ಬಿಬಿಎಂಪಿ ವ್ಯಾಪ್ತಿಯಲ್ಲಿ ಒಟ್ಟು 890 ಬಸ್ ತಂಗುದಾಣಗಳಿರುತ್ತವೆ. |
| ಇ) | ಬಸ್ಸುಗಳ ವಾಹನ ಚಾಲಕರು ಬಸ್ ನಿಲ್ದಾಣ/ ತಂಗುದಾಣಗಳಲ್ಲಿ ಸರಿಯಾಗಿ ವಾಹನ ನಿಲುಗಡೆ ಮಾಡಿ ಇತರೆ ವಾಹನಗಳ ಸಂಚಾರಕ್ಕೆ ಅನುವು ಮಾಡುವ ಕುರಿತು ಯಾವುದಾದರೂ ಮಾನದಂಡಗಳನ್ನು ಅನುಸರಿಸಲಾಗುತ್ತಿದೆಯೇ; ಹಾಗೂ ಇದರ ಕುರಿತು ಚಾಲಕರಿಗೆ ಸೂಕ್ತ ತರಬೇತಿ ನೀಡಲಾಗಿದೆಯೇ; (ವಿವರ ನೀಡುವುದು) | • ಬಸ್ಸುಗಳನ್ನು ನಿಗದಿತ ಬಸ್ ನಿಲುಗಡೆಗಳಲ್ಲಿ ನಿಲ್ಲಿಸಿ ಪ್ರಯಾಣಿಕರನ್ನು ಇಳಿಸಿ/ ಹತ್ತಿಸಿಕೊಳ್ಳುವಂತೆ ಚಾಲನಾ ಸಿಬ್ಬಂದಿಗಳಿಗೆ ಸೂಚನೆಗಳನ್ನು ನೀಡಲಾಗುತ್ತಿದೆ.<br>• ಘಟಕಗಳಲ್ಲಿ ಆಗಿಂದಾಗ್ಗೆ ದ್ವಾರಸಭೆಗಳನ್ನು ಹಮ್ಮಿಕೊಂಡು, ನಿಗದಿತ ಬಸ್ಸು ನಿಲುಗಡೆಗಳಲ್ಲಿ ಬಸ್ಸುಗಳನ್ನು ನಿಲ್ಲಿಸಿ ಪ್ರಯಾಣಿಕರನ್ನು ಇಳಿಸಿ/ಹತ್ತಿಸಿಕೊಳ್ಳುವಂತೆ ಹಾಗೂ ಸಾರ್ವಜನಿಕ ಪ್ರಯಾಣಿಕರೊಂದಿಗೆ ಸೌಜನ್ಯದಿಂದ ವರ್ತಿಸುವಂತೆ ಎಲ್ಲಾ ಚಾಲನಾ ಸಿಬ್ಬಂದಿಗಳಿಗೆ ಸೂಕ್ತ ತಿಳುವಳಿಕೆಯನ್ನು ನೀಡಲಾಗುತ್ತಿದೆ.<br>• ನಿಗದಿತ ಬಸ್ಸು ನಿಲುಗಡೆಗಳಲ್ಲಿ ಬಸ್ಸುಗಳನ್ನು ನಿಲ್ಲಿಸುವಂತೆ ಹಾಗೂ ಸಾರ್ವಜನಿಕ ಪ್ರಯಾಣಿಕರೊಂದಿಗೆ ಸೌಜನ್ಯದಿಂದ ವರ್ತಿಸುವಂತೆ ಸುತ್ತೋಲೆ/ಕಛೇರಿ ಆದೇಶಗಳನ್ನು ಹೊರಡಿಸಿ, ಸದರಿ ಆದೇಶದಲ್ಲಿನ ಅಂಶಗಳನ್ನು ಪಾಲಿಸುವಂತೆ ತಿಳಿಸಲಾಗಿದೆ.<br>• ಚಾಲನಾ ಸಿಬ್ಬಂದಿಗಳು ಸರಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವ ಬಗ್ಗೆ ಸಾರಥಿ ಗಸ್ತು ವಾಹನಗಳನ್ನು ನಿಯೋಜಿಸಿ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |

| | | |
|---|---|---|
| | | • ಸಂಸ್ಥೆಯಿಂದ ಚಾಲನಾ ಸಿಬ್ಬಂದಿಗಳಿಗೆ ಪುನಶ್ಚೇತನ ತರಬೇತಿಯನ್ನು ಹಮ್ಮಿಕೊಳ್ಳಲಾಗುತ್ತಿದ್ದು, ಸದರಿ ತರಬೇತಿಯಲ್ಲಿ ಚಾಲನಾ ಸಿಬ್ಬಂದಿಗಳು ತಮ್ಮ ಕರ್ತವ್ಯದ ಸಮಯದಲ್ಲಿ ನಿರ್ವಹಿಸಬೇಕಾದ ಜವಾಬ್ದಾರಿ ಮತ್ತು ಹೊಣೆಗಾರಿಕೆಗಳ ಬಗ್ಗೆ ಅರಿವು ಮೂಡಿಸುತ್ತಿರುವುದರ ಜೊತೆಗೆ ನಿಗದಿತ ನಿಲುಗಡೆಗಳಲ್ಲಿ ಬಸ್ಸುಗಳನ್ನು ನಿಲ್ಲಿಸುವಂತೆ ಹಾಗೂ ಸಾರ್ವಜನಿಕ ಪ್ರಯಾಣಿಕರೊಂದಿಗೆ ಸೌಜನ್ಯದಿಂದ ವರ್ತಿಸುವಂತೆ ಸಹ ಸೂಕ್ತ ತಿಳುವಳಿಕೆ ನೀಡಲಾಗುತ್ತಿದೆ.<br><br>ಬೆಂ.ಮ.ಸಾ.ಸಂಸ್ಥೆಯಿಂದ ತರಬೇತಿ ನೀಡಲಾಗಿರುವ ಚಾಲನಾ ಸಿಬ್ಬಂದಿಗಳ ವಿವರಗಳು ಕೆಳಕಂಡಂತಿವೆ.<br><br>ವರ್ಷ / ಚಾಲಕರು / ನಿರ್ವಾಹಕರು<br>2018–19 / 11415 / 2455<br>2019–20 / 15419 / 5557<br>2021–21 (**Dec–20**) / 403 / 67 |
| ಈ) | ಬಿ.ಎಂ.ಟಿ.ಸಿ ಬಸ್ಸುಗಳಲ್ಲಿ ಪ್ರಥಮ ಚಿಕಿತ್ಸಾ ಕಿಟ್‌ಗಳನ್ನು ಅಳವಡಿಸಲಾಗಿದೆಯೇ; (ವಿವರ ನೀಡುವುದು) | ಸಂಸ್ಥೆಯ ಎಲ್ಲಾ ಬಸ್ಸುಗಳಲ್ಲಿ ಕೇಂದ್ರ ಮೋಟಾರು ವಾಹನ ಕಾಯ್ದೆ ಅನ್ವಯ ಕಡ್ಡಾಯವಾಗಿ ಪ್ರಥಮ ಚಿಕಿತ್ಸಾ ಕಿಟ್‌ಗಳನ್ನು ಹಾಗೂ ಸಂಬಂಧಪಟ್ಟ ಔಷಧಗಳನ್ನು (ಕ್ರೀಮ್, ಬ್ಯಾಂಡೇಜ್ ಮತ್ತು ಇನ್ನಿತರೆ ಸಲಕರಣೆಗಳನ್ನು) ಅಳವಡಿಸಲಾಗಿರುತ್ತದೆ. |
| ಉ) | ಬಸ್ ನಿಲ್ದಾಣಗಳಲ್ಲಿ/ ತಂಗುದಾಣಗಳಲ್ಲಿ ಸಿಸಿಟಿವಿ ಕ್ಯಾಮರಗಳನ್ನು ಅಳವಡಿಸಲಾಗಿದೆಯೇ; ಮತ್ತು ಪ್ರಯಾಣಿಕರಿಗೆ ಕುಡಿಯುವ ನೀರಿನ ವ್ಯವಸ್ಥೆ ಹಾಗೂ ಇತರೆ ಸೌಲಭ್ಯಗಳನ್ನು ಕಲ್ಪಿಸಲಾಗಿದೆಯೇ; | ಬೆಂ.ಮ.ಸಾ.ಸಂಸ್ಥೆಯ 11 ಟಿಟಿಎಂಸಿಗಳಲ್ಲಿ ಒಟ್ಟು 202 ಕ್ಯಾಮರಾಗಳನ್ನು ಅಳವಡಿಸಲಾಗಿದೆ ಮತ್ತು ಸಂಸ್ಥೆಯ ಬಸ್ ನಿಲ್ದಾಣಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಹಾಗೂ ಇತರೆ ಸೌಲಭ್ಯಗಳಾದ ಶೌಚಾಲಯ, ಆಸನಗಳು, ಉಪಹಾರ ಗೃಹ, ಪ್ರಯಾಣಿಕರು ಕಾಯುವ ಅಜಾರ, ಬಸ್ ಫ್ಲಾಟ್ ಫಾರಂಗಳು, ಸೂಚನಾ ಫಲಕಗಳು, ಟಿಕೆಟ್ ವಿತರಣಾ ಕೌಂಟರ್‌ಗಳು, ವಿಚಾರಣಾ ಕೊಠಡಿ, ಮಹಿಳಾ ವಿಶ್ರಾಂತಿ ಕೊಠಡಿ, ಅವಶ್ಯ ವಾಣಿಜ್ಯ ಮಳಿಗೆಗಳು, ಹಾಗೂ ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸಲಾಗಿದೆ. |
| ಊ) | ಬಸ್‌ಗಳಲ್ಲಿ ಪ್ರಯಾಣಿಕರು ಸಂಚಾರ ನಡೆಸುವಾಗ ಕೊರೋನ ವೈರಸ್ ಹರಡುವುದನ್ನು ತಪ್ಪಿಸಲು ಮುನ್ನೆಚ್ಚರಿಕೆ ಕ್ರಮವಾಗಿ ಯಾವುದಾದರೂ ಮಾನದಂಡಗಳನ್ನು ಅಳವಡಿಸಲಾಗಿದೆಯೇ; (ವಿವರ ನೀಡುವುದು) | ಬಸ್‌ಗಳಲ್ಲಿ ಪ್ರಯಾಣಿಕರು ಸಂಚಾರ ನಡೆಸುವಾಗ ಕೊರೋನಾ ವೈರಸ್ ಹರಡುವುದನ್ನು ತಪ್ಪಿಸಲು ಬೆಂ.ಮ.ಸಾ.ಸಂಸ್ಥೆಯಿಂದ ಕೆಳಕಂಡ ಮುನ್ನೆಚ್ಚರಿಕೆ ಕ್ರಮಗಳನ್ನು ಅಳವಡಿಸಲಾಗಿದೆ.<br><br>➢ ಸಂಸ್ಥೆಯ ವಾಹನಗಳಲ್ಲಿ ಕರ್ತವ್ಯ ನಿರ್ವಹಿಸುವ ಚಾಲಕರು, ನಿರ್ವಾಹಕರಿಗೆ ಹಾಗೂ ಪ್ರಯಾಣಿಕರಿಗೆ ಸಾಂಕ್ರಾಮಿಕ ರೋಗ ಹರಡದಂತೆ ಬಸ್ಸುಗಳಲ್ಲಿ ಶುಚಿತ್ವವನ್ನು ಕಾಪಾಡಲು, ಸೋಂಕು ನಿವಾರಣಾ ಔಷಧಿಗಳನ್ನು ಸಿಂಪಡಿಸಿ ಶುಚಿಗೊಳಿಸಲಾಗುತ್ತಿದೆ.<br>➢ ಸಾರ್ವಜನಿಕ ಪ್ರಯಾಣಿಕರು ಚಾಲಕರೊಂದಿಗೆ ಅಂತರ ಕಾಪಾಡಿಕೊಳ್ಳಲು, ಚಾಲಕರಿಗೆ ಪ್ರತ್ಯೇಕ ಕ್ಯಾಬೀನ್ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ.<br>➢ ಸಿಬ್ಬಂದಿಗಳು ಪ್ರತಿದಿನ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಮಯದಲ್ಲಿ ದೇಹದ ಉಷ್ಣಾಂಶವನ್ನು (temperature) ಮತ್ತು ಆಕ್ಸಿಜನ್ ಮಟ್ಟವನ್ನು (Oximeter) ಪರೀಕ್ಷಿಸಿ, ನಂತರ ಕರ್ತವ್ಯಕ್ಕೆ ನಿಯೋಜಿಸಲಾಗುವುದು. |

<table>
<tr>
<td></td>
<td></td>
<td>
➢ ಪ್ರಯಾಣಿಕರು ಮುಖಗವಸು ಧರಿಸುವುದು ಕಡ್ಡಾಯಗೊಳಿಸಲಾಗಿರುತ್ತದೆ.<br><br>
➢ ಪ್ರಯಾಣಿಕರ ಸುರಕ್ಷತೆ ಹಾಗೂ ಚಾಲನಾ ಸಿಬ್ಬಂದಿಗಳ ಆರೋಗ್ಯವನ್ನು ಕಾಪಾಡುವ ನಿಟ್ಟಿನಲ್ಲಿ ಕರ್ತವ್ಯದ ಅವಧಿಯಲ್ಲಿ ಸಿಬ್ಬಂದಿಗಳು ಕಡ್ಡಾಯವಾಗಿ ಮುಖಗವಸನ್ನು ಧರಿಸುವಂತೆ ತಿಳಿಸಲಾಗಿರುತ್ತದೆ ಹಾಗೂ ಕೈಗಳ ಶುಚಿತ್ವವನ್ನು ಕಾಪಾಡಿಕೊಳ್ಳಲು ಸ್ಯಾನಿಟೈಸರ್‌ನ್ನು ಬಳಸುವಂತೆ ತಿಳಿಸಲಾಗಿರುತ್ತದೆ.<br><br>
➢ ಪ್ರಯಾಣಿಕರು ಹಾಗೂ ನಿರ್ವಾಹಕರ ನಡುವೆ ನಗದು ವ್ಯವಹಾರವನ್ನು ಕಡಿಮೆಗೊಳಿಸುವ ನಿಟ್ಟಿನಲ್ಲಿ ಪ್ರಯಾಣ ದರ ರೂ.5/- ರ ಗುಣಕದಲ್ಲಿ ನಿಗದಿಪಡಿಸಿ ಪುನರ್‌ರಚಿತ ಪ್ರಯಾಣದರಗಳನ್ನು ಆಕರಿಸಲಾಗುತ್ತಿದೆ.<br><br>
➢ ಡಿಜಿಟಲ್ ಟಿಕೇಟಿಂಗ್ (QR code based) ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗಿರುತ್ತದೆ.
</td>
</tr>
<tr>
<td>ಋ)</td>
<td>ನಗರದಲ್ಲಿ ಎಷ್ಟು ಕಡೆ ಬಸ್-ಬೇಗಳ ನಿರ್ಮಾಣ ಮಾಡಲಾಗಿದೆ; ಮತ್ತು ಎಷ್ಟು ಕಡೆ ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ; ಈ ಕುರಿತು ಬಿ.ಬಿ.ಎಂ.ಪಿ ಜೊತೆಗೆ ಸಮನ್ವಯತೆ ಹೊಂದಲಾಗಿದೆಯೇ; (ವಿವರ ನೀಡುವುದು)</td>
<td>
ಬಿಬಿಎಂಪಿ ಯಿಂದ 2017-18ನೇ ಸಾಲಿನಲ್ಲಿ ನಗರದ 14 ಕಡೆಗಳಲ್ಲಿ ಬಸ್-ಬೇ ನಿರ್ಮಿಸಲಾಗಿದೆ.<br><br>
ಬಿಬಿಎಂಪಿ ಹಾಗೂ ಬೆಂಗಳೂರು ನಗರ ಸಂಚಾರ ಪೊಲೀಸರ ಸಮನ್ವಯದಿಂದ ಬಸ್ ನಿಲುಗಡೆಗಳನ್ನು ನಿಗದಿಪಡಿಸಿ ಬಸ್ ಬೇಗಳನ್ನು ನಿರ್ಮಿಸಲು ಸಮನ್ವಯತೆ ಸಾಧಿಸಲಾಗುತ್ತಿದೆ.
</td>
</tr>
<tr>
<td>ಋ)</td>
<td>ಕಳೆದ 5 ವರ್ಷಗಳಿಂದ ನಗರದಲ್ಲಿ ಸಂಚಾರ ನಡೆಸುವ ಬಿ.ಎಂ.ಟಿ.ಸಿ ಬಸ್ಸುಗಳಲ್ಲಿ ಮತ್ತು ಎಲ್ಲಾ ರೀತಿಯ ಬಸ್ಸು ನಿಲ್ದಾಣ/ತಂಗುದಾಣಗಳಲ್ಲಿ ಜಾಹೀರಾತು ಪ್ರದರ್ಶನದಿಂದ ಮತ್ತು ಬಿ.ಎಂ.ಟಿ.ಸಿಯ ಸ್ವತ್ತಿನಲ್ಲಿ ಖಾಸಗಿಯವರಿಗೆ ಬಾಡಿಗೆ ಹಾಗೂ ಇನ್ನಿತರೆ ಮೂಲಗಳಿಂದ ಬಂದಂತಹ ಒಟ್ಟು ಆದಾಯದ ವಿವರಗಳನ್ನು ನೀಡುವುದು ಹಾಗೂ ವಿವಿಧ ಖಾಸಗಿ ವ್ಯಕ್ತಿಗಳಿಂದ ಮತ್ತು ಸಂಸ್ಥೆಗಳಿಂದ ಮಾಹೆಯಾನ ಪಡೆಯುವ ಬಾಡಿಗೆ ಎಷ್ಟು? (ಸಂಪೂರ್ಣ ವಿವರ ನೀಡುವುದು)</td>
<td>
ಕಳೆದ 5 ವರ್ಷಗಳಿಂದ ಬಿ.ಎಂ.ಟಿ.ಸಿ ಬಸ್ಸುಗಳಲ್ಲಿ ಮತ್ತು ಎಲ್ಲಾ ರೀತಿಯ ಬಸ್ಸು ನಿಲ್ದಾಣ/ತಂಗುದಾಣಗಳಲ್ಲಿ ಜಾಹೀರಾತು ಪ್ರದರ್ಶನದಿಂದ ಮತ್ತು ಬಿ.ಎಂ.ಟಿ.ಸಿಯ ಸ್ವತ್ತಿನಲ್ಲಿ ಖಾಸಗಿಯವರಿಂದ ಹಾಗೂ ಸಂಸ್ಥೆಗಳಿಂದ ಬಾಡಿಗೆ ಸ್ವೀಕರಿಸಿದ ಆದಾಯದ ವಿವರ.<br><br>
(ರೂ.ಕೋಟಿಗಳಲ್ಲಿ)
<table>
<tr><th>ವರ್ಷ</th><th>ಜಾಹೀರಾತು</th><th>ಬಾಡಿಗೆ</th><th>ಒಟ್ಟು</th></tr>
<tr><td>2015-2016</td><td>12.10</td><td>55.07</td><td>67.17</td></tr>
<tr><td>2016-2017</td><td>14.00</td><td>56.91</td><td>70.91</td></tr>
<tr><td>2017-2018</td><td>20.79</td><td>62.64</td><td>83.43</td></tr>
<tr><td>2018-2019</td><td>24.07</td><td>66.83</td><td>90.90</td></tr>
<tr><td>2019-2020</td><td>24.62</td><td>64.12</td><td>88.74</td></tr>
<tr><td>ಒಟ್ಟು</td><td>95.58</td><td>305.57</td><td>401.15</td></tr>
</table>
<br>
ಪ್ರಸ್ತುತ ವಿವಿಧ ಖಾಸಗಿ ವ್ಯಕ್ತಿಗಳಿಂದ ಮತ್ತು ಸಂಸ್ಥೆಗಳಿಂದ ಮಾಹೆಯಾನ ಪಡೆಯುವ ಬಾಡಿಗೆಯ ವಿವರ ಈ ಕೆಳಕಂಡಂತಿದೆ.<br><br>
1. ಜಾಹಿರಾತು ಮೂಲಗಳಿಂದ: ರೂ.1,39,19,956/-<br>
2. ವಾಣಿಜ್ಯ ಮಳಿಗೆಗಳಿಂದ: ರೂ.6,91,55,124/-
</td>
</tr>
</table>

ಸಂಖ್ಯೆ: ಟಿಡಿ 02 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು